ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತೊಂದನೆಯ ಅಧಿವೇಶನ
ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಸೂಕ್ಷ್ಮ ವಲಯ ಕಡಿತ ಕುರಿತು

ಶ್ರೀ ಹೆಚ್.ಎಂ. ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು) –

85 (874) ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಪರಿಸರ ಸೂಕ್ಷ್ಮ ವಲಯ ಕಡಿತ ಈಗಾಗಲೇ ಪರಿಸರ ಪ್ರೇಮಿಗಳು ಮತ್ತು ಪರಿಣಿತರ ಆಕ್ರೋಶಕ್ಕೆ ಕಾರಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಸೂಕ್ಷ್ಮ ಜೈವಿಕ ವಲಯವನ್ನು ಅಭಿವೃದ್ಧಿಯ ನೆಪವೊಡ್ಡಿ ಕಡಿತಗೊಳಿಸುವ ಸರ್ಕಾರದ ನಿರ್ಧಾರದ ಹಿಂದಿನ ಉದ್ದೇಶವೇನು; (ವಿವರ ನೀಡುವುದು)

(ಇ) ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಈ ಪರಿಸರ ಸೂಕ್ಷ್ಮ ವಲಯ ಆನೆ ಕಾರಿಡಾರ್ ಸಹ ಆಗಿರುವುದನ್ನು ಸರ್ಕಾರ ಗಮನಿಸಿದೆಯೇ;
ಈ ಕುರಿತಾಗಿ ಕಾನೂನು ಹೋರಾಟ ಚಾಲ್ತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಸ್ಥಳೀಯ ರೈತರು, ಪರಿಸರವಾದಿಗಳು ಮತ್ತು ಮಾಧ್ಯಮಗಳು ಇದು ಪರಿಸರ ವಿರೋಧಿ ಕ್ರಮ ಎಂದು ಆರೋಪಿಸುತ್ತಿರುವುದು ನಿಜವೇ?